# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1049 |
| ಸದಸ್ಯರ ಹೆಸರು | ಶ್ರೀ ಯು ಬಿ ವೆಂಕಟೇಶ್ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರಕ್ಕೆ ರಾಜ್ಯದ ಮುಜರಾಯಿ ದೇವಸ್ಥಾನಗಳಿಂದ ಬರುತ್ತಿರುವ ವಾರ್ಷಿಕ ವರಮಾನವೆಷ್ಟು (ಜಿಲ್ಲಾವಾರು ಮಾಹಿತಿ ನೀಡುವುದು) | ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆಯ ವ್ಯಾಪ್ತಿಗೆ ರಾಜ್ಯದ ಒಟ್ಟು 34,563 ದೇವಸ್ಥಾನಗಳು ಒಳಪಟ್ಟಿರುತ್ತವೆ. ಈ ದೇವಸ್ಥಾನಗಳನ್ನು ಆದಾಯಕ್ಕನುಗುಣವಾಗಿ ಪ್ರವರ್ಗ 'ಎ' 'ಬಿ' ಮತ್ತು 'ಸಿ' ದೇವಾಲಯಗಳೆಂದು ವರ್ಗೀಕರಿಸಲಾಗಿದೆ. |

| ಪ್ರವರ್ಗ | ವಿವರ | ಸಂಸ್ಥೆಗಳ ಸಂಖ್ಯೆ | ನಿಯಮಿಸಲಾದ ಪ್ರಾಧಿಕಾರಿಗಳು |
|---|---|---|---|
| ಎ | ವಾರ್ಷಿಕ ವರಮಾನವು ರೂ. ಇಪ್ಪತ್ತೈದು ಲಕ್ಷಗಳನ್ನು ಮೀರಿದ ಸಂಸ್ಥೆಗಳು | 205 | ಆಯುಕ್ತರು |
| ಬಿ | ವಾರ್ಷಿಕ ವರಮಾನವು ರೂ. ಐದು ಲಕ್ಷಗಳನ್ನು ಮೀರಿ ರೂ.ಇಪ್ಪತ್ತೈದು ಲಕ್ಷಗಳನ್ನು ಮೀರದ ಸಂಸ್ಥೆಗಳು | 139 | ಜಿಲ್ಲಾಧಿಕಾರಿಗಳು |
| ಸಿ | ವಾರ್ಷಿಕ ವರಮಾನವು ರೂ. ಐದು ಲಕ್ಷಗಳನ್ನು ಮೀರದ ಸಂಸ್ಥೆಗಳು | 34219 | ಉಪ ವಿಭಾಗಾಧಿಕಾರಿಗಳು/ ಸಹಾಯಕ ಆಯುಕ್ತರು |
| | ಒಟ್ಟು | 34563 | |

ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿರುವ ಅಧಿಸೂಚಿತ ದೇವಾಲಯಗಳಿಗೆ ಬರುವ ವಾರ್ಷಿಕ ವರಮಾನವನ್ನು ದೇವಾಲಯದ ನಿಧಿಗೆ ಜಮೆ ಮಾಡಲಾಗುತ್ತದೆ ಹಾಗೂ ದೇವಾಲಯಕ್ಕೆ ಮಂಜೂರಾಗುವ ಆಯವ್ಯಯದಂತೆ ದೇವಸ್ಥಾನದ ನಿತ್ಯಕಟ್ಲೆ; ಹೆಚ್ಚು ಕಟ್ಲೆ; ಸಿಬ್ಬಂದಿ ವೇತನ; ಮೂಲಭೂತ ಸೌಕರ್ಯ ಮತ್ತು ನಿರ್ವಹಣೆ ವೆಚ್ಚಗಳಿಗಾಗಿ ಭರಿಸಲಾಗುತ್ತದೆ.

ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿರುವ ಅಧಿಸೂಚಿತ ದೇವಾಲಯಗಳಿಂದ ಸರ್ಕಾರಕ್ಕೆ ಯಾವುದೇ ವಾರ್ಷಿಕ ವರಮಾನ ಬರುವುದಿಲ್ಲ.

| | | |
|---|---|---|
| ಆ) | ಈ ವರಮಾನದಲ್ಲಿನ ಒಂದಷ್ಟು ಭಾಗದ ಹಣವನ್ನು ಆಯಾ ಜಿಲ್ಲೆಯಲ್ಲಿ ಶಿಥಿಲಾವಸ್ಥೆಯಲ್ಲಿರುವ ಪ್ರಾಚೀನ ದೇವಸ್ಥಾನಗಳ ಅಭಿವೃದ್ಧಿಗೆ ಮೀಸಲಿರಿಸಲಾಗಿದೆಯೇ? | ಇಲಾಖೆಯ ವ್ಯಾಪ್ತಿಯಲ್ಲಿ ಪ್ರವರ್ಗ 'ಸಿ' ದೇವಸ್ಥಾನಗಳ ಸಂಖ್ಯೆಯು ಹೆಚ್ಚಿರುವುದರಿಂದ ಆಯಾ ಜಿಲ್ಲೆಯಲ್ಲಿ ಶಿಥಿಲಾವಸ್ಥೆಯಲ್ಲಿರುವ ಪ್ರಾಚೀನ ದೇವಸ್ಥಾನಗಳನ್ನು ಅಭಿವೃದ್ಧಿ ಪಡಿಸುವ ಪ್ರಕ್ರಿಯೆಗಳು ದೀರ್ಘಾವಧಿಯನ್ನು ಅಪೇಕ್ಷಿಸುತ್ತವೆ ಈ ನಿಟ್ಟಿನಲ್ಲಿ ಸೂಕ್ತ ಆದಾಯವಿಲ್ಲದ ದೇವಸ್ಥಾನಗಳ ಸಂರಕ್ಷಣೆಗಾಗಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997 ಕಲಂ 21ಎಫ್ ರಡಿಯಲ್ಲಿ ಅಧಿಸೂಚಿತ ದೇವಾಲಯಗಳನ್ನು ಆರ್ಥಿಕವಾಗಿ ಸದೃಢವಾಗಿರುವ ದೇವಾಲಯಗಳು ದತ್ತು ತೆಗೆದುಕೊಂಡು ನಿರ್ವಹಿಸಲು ಅವಕಾಶ ಕಲ್ಪಿಸಲಾಗಿದೆ. ಹಾಗೂ ದೇವಸ್ಥಾನಗಳ ಅಗತ್ಯಕ್ಕನುಗುಣವಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಜೀರ್ಣೋದ್ಧಾರ ಮತ್ತು ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಸರ್ಕಾರದಿಂದ ಅನುದಾನವನ್ನು ಸಹ ಬಿಡುಗಡೆ ಮಾಡಲಾಗುತ್ತಿದೆ.<br><br>ದೇವಸ್ಥಾನಗಳ ಜೀರ್ಣೋದ್ಧಾರ ಮತ್ತು ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ದಾನಿಗಳು ಮುಂದೆ ಬಂದಲ್ಲಿ ಅವರಿಗೆ ನಿಯಮಾನುಸಾರ ಅನುಮತಿ ನೀಡಲಾಗುತ್ತಿದೆ. ಅವಶ್ಯಕತೆ ಕಂಡು ಬಂದಂತಹ ಅಧಿಸೂಚಿತ ದೇವಸ್ಥಾನಗಳಿಗೆ ಇಲಾಖೆಯ ಸಾಮಾನ್ಯ ಸಂಗ್ರಹಣಾ ನಿಧಿಯಿಂದಲೂ ಧನ ಸಹಾಯ ಮಾಡಲಾಗುತ್ತಿದೆ. |
| ಇ) | ಇಲ್ಲದಿದ್ದಲ್ಲಿ, ಮೀಸಲಾಗಿರಿಸಿ ಶಿಥಿಲಾವಸ್ಥೆಯಲ್ಲಿರುವ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | |

ಸಂಖ್ಯೆ: ಕಂಇ 274 ಮುಸಪ್ರ 2021

(ಶಶಿಕಲಾ ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು